

ಆರೋಗ್ಯ ಅರಿವು
ನವಸಾಕ್ಷರರ ಸಾಹಿತ್ಯ ಮಾಲೆ

# ಒಂದು ಮುಂಜಾನೆಯ ಜಾದೂ




ಭಾರತ ಜ್ಞಾನ ವಿಜ್ಞಾನ ಸಮಿತಿ
ಭಾರತೀಯ ವಿಜ್ಞಾನ ಮಂದಿರ
ಬೆಂಗಳೂರು - 560 012



ಆರೋಗ್ಯ ಅರಿವು



# ಒಂದು ಮುಂಜಾನೆಯ ಜಾದೂ

## ವಿಷಯ : ತಾಯಿ ಆರೋಗ್ಯದ ರಕ್ಷಣೆ : ಸಮುದಾಯದ ಪಾತ್ರ

ಅನುವಾದ: • ಮೊರಬದ ಮಲ್ಲಿಕಾರ್ಜುನ



**ONDU MUNJANEYA JADU :**
Health Awareness Literature, translated by :
MORABADA MALLIKARJUNA

Published by Bharath Gyan Vigyan Samithi, Badam Marg, Indian Institute of Science Campus, Bangalore - 560 012

Crown: ¼ Pages 16 + 4 Price: Rs. **4**



Book Designe: WILFRED D'SOUZA






ಪ್ರಕಾಶಕರು:

ಭಾರತ ಜ್ಞಾನ ವಿಜ್ಞಾನ ಸಮಿತಿ
ಭಾರತೀಯ ವಿಜ್ಞಾನ ಸಂಸ್ಥೆಯ ಆವರಣ
ಬೆಂಗಳೂರು - 12

ಮುದ್ರಕರು: ಪ್ರಕಾಶ್ ಆಫ್ ಸೆಟ್ ಪ್ರಿಂಟರ್ಸ್, ಬೈಕಂಪಾಡಿ, ಮಂಗಳೂರು
D.T.P. : Sri Guru Computers, Ganesh Mahal Complex, K. S. Rao Road, Mangalore - 1

ಬೆಲೆ : ರೂಪಾಯಿ ನಾಲ್ಕು ಮಾತ್ರ



# ಒಂದು ಮುಂಜಾನೆಯ ಜಾದೂ

ಒಂದು ನಡು ಬೇಸಗೆಯ ದಿನ.

ರಂಗಾಪುರದ ರಂಗಪ್ಪ ತನ್ನ ತೋಟಕ್ಕೆ ಹೋಗುತ್ತಿದ್ದ.

ರಂಗಪ್ಪ ಗ್ರಾಮ ಪಂಚಾಯತಿಯ ಅಧ್ಯಕ್ಷ

ಅವನು ತಾನು ಹೋಗುವ ದಾರಿಯಲ್ಲಿ ಒಂದು ಕಲ್ಲು ಕಂಡ.

ಆ ಕಲ್ಲು ಹೊಳೆಯುತ್ತಿತ್ತು.

ಸೂರ್ಯನಂತೆ ಬಿಸಿಯಾಗಿತ್ತು.

“ನಾನು ಸೂರ್ಯದೇವ”

ಮೆದುವಾದ ಗೂಢವಾದ ಧ್ವನಿ ಹೇಳಿತು.

“ನಿನಗೆ ಬೇಕಾದುದನ್ನು ಕೇಳು”




ರಂಗಪ್ಪನಿಗೆ ಮಗನಿರಲಿಲ್ಲ

ಅವನು ಹೇಳಿದ

"ನನಗೆ ಒಬ್ಬ ಮಗ ಬೇಕು"

ಕೂಡಲೇ ರಂಗಪ್ಪನ ಹೊಟ್ಟೆ ದೊಡ್ಡದಾಗತೊಡಗಿತು.

"ನಾನು....?...ನಾನು.....?" ರಂಗಪ್ಪ ಬೊಬ್ಬೆ ಹಾಕಿದ.

"ನನಗೆ ಮಗ ಬೇಡ"

"ಬೇಡವೇ?"

"ಇಲ್ಲ, ಇಲ್ಲ.... ಗಂಡಸರು ಮಕ್ಕಳನ್ನು ಹೆರುವದಿಲ್ಲ."

ಸೂರ್ಯದೇವ ನಕ್ಕ.



"ಮಗುವಿಗಾಗಿ ವಿಷ್ಣು ದೇವ ಮೋಹಿನಿಯಾಗಲಿಲ್ಲವೆ?"

"ಈಗ ನಿನ್ನ ಸರದಿ "

ಸುದ್ದಿ ಕಾಡು ಬೆಂಕಿಯಂತೆ ಹರಡಿತು.

ರಂಗಪ್ಪ ತನ್ನ ಹೆಂಡತಿ ಕಮಲಳನ್ನು ಕೇಳಿದ.

"ನಮ್ಮ ಮೊದಲ ಮಗಳು ಹುಟ್ಟಿದಾಗ

ನಿನಗೆ ಇಷ್ಟು ತೊಂದರೆಯಾಗಿತ್ತ?"

ಅವನ ಹೊಟ್ಟೆ ಮತ್ತೂ ದೊಡ್ಡದಾಯಿತು.

ಸಹಜವಾಗಿ ದಣಿವಾಗತೊಡಗಿತು.

ಜೊತೆಗೆ ಹಸಿವು

ಅವನಿಗೆ ಆಶ್ಚರ್ಯ

ತನ್ನ ಹೆಂಡತಿ ಕಮಲ ಹೇಗೆ ಸುಧಾರಿಸಿದಳು ಎಂದು



ಕಮಲ ಗರ್ಭಿಣಿ ಆಗಿದ್ದಾಗ

ಕೊನೆಯ ತಿಂಗಳವರೆಗೂ

ಪ್ರತಿದಿನ ತುಂಬಿದ ಕೊಡದಲ್ಲಿ ನೀರು ತಂದಿದ್ದಾಳೆ.

ಮನೆಗೆ ಬೇಕಾದ ಸೌದೆ ತಂದಿದ್ದಾಳೆ.

ಅಡಿಗೆ ಮಾಡಿದ್ದಾಳೆ.

ಜೊತೆಗೆ ತೋಟದಲ್ಲಿ ತನಗೆ ಸಹಾಯ ಮಾಡಿದ್ದಾಳೆ.

ಆದರೆ ರಂಗಪ್ಪನಿಗೆ ತನ್ನ ದಿನ ದಿನದ ಕೆಲಸಗಳನ್ನು ಮಾಡಬೇಕಾದರೂ ವಿಪರೀತ ದಣಿವು ಎನಿಸಿತು.

ಅವನ ಹೆಂಡತಿ ಅವನಿಗೆ ತುಂಬಾ ಸಹಾಯ ಮಾಡಿದಳು

ರಂಗಪ್ಪ ಯೋಚಿಸಿದ.



ಅವಳು ಗರ್ಭಿಣಿಯಾಗಿದ್ದಾಗ

ನಾನು ಸಹಾಯ ಮಾಡಿದೆನೆ?

ಅವನಿಗೆ ತಾನು ಬದುಕಲಾರೆ ಎನಿಸಿತು

ಬಹಳ ಚಿಂತೆಗೊಳಗಾದ

ಪಂಚಾಯತಿಯ ಸಭೆ ಕರೆದ

ಸಭೆಗೆ ಬಹಳ ಬಂದರು

ಬಹಳಷ್ಟು ಜನ ಹೆಂಗಸರೂ ಬಂದರು

ಆರೋಗ್ಯ ಕಾರ್ಯಕರ್ತೆಯರೂ ವೈದ್ಯರೂ ಬಂದರು.

ಒಬ್ಬ ಹಿರಿಯ ಎದ್ದು ಹೇಳಿದ

"ನಮ್ಮ ಹಳ್ಳಿಯಲ್ಲಿ ಬಹಳಷ್ಟು ಜನ ಹೆಂಗಸರು

ಹೆರುವಾಗ ಸಾಯುತ್ತಾರೆ."

ಒಬ್ಬ ಹೆಂಗಸು ಹೇಳಿದಳು

"ಬಹಳಷ್ಟು ಮಕ್ಕಳು ಸಹಾ ಸಾಯುತ್ತವೆ."

ಇಷ್ಟು ತೊಂದರೆ ಮತ್ತು ನೋವಿನ ನಂತರ

ಮಗುವನ್ನು ಕಳೆದುಕೊಳ್ಳುವುದು

ಎಷ್ಟು ನಾಚಿಕೆ ಮತ್ತು ದು:ಖದ ವಿಚಾರ.

ಸೇರಿದ ಜನ ಹೇಳಿದರು

"ನಮ್ಮ ಅಧ್ಯಕ್ಷರಿಗೆ ಹೀಗಾಗಬಾರದು."





ಆರೋಗ್ಯ ಕಾರ್ಯಕರ್ತೆ ಹೇಳಿದಳು.
"ಎಲ್ಲಾ ಗರ್ಭಿಣಿಯರಿಗೂ ಸಾಕಷ್ಟು ಆಹಾರ
ಮತ್ತು ವಿಶ್ರಾಂತಿ ಅತಿ ಮುಖ್ಯವಾದ ವಿಷಯ".
ಈಗ ರಂಗಪ್ಪ ಮಾತನಾಡಿದ. ಅವನು ಹೇಳಿದ.
"ಸರಕಾರದ ವತಿಯಿಂದ ನಾವೇ
ಎಲ್ಲಾ ಗರ್ಭಿಣಿಯರಿಗೂ ವಿಶೇಷ ಆಹಾರ ಒದಗಿಸೋಣ."
ಮೊಟ್ಟೆ, ಒಂದು ಲೋಟ ಹಾಲು ಹಸಿರು ತರಕಾರಿ ಮತ್ತು ಅನ್ನ
ಇಷ್ಟಾದರೂ ಅವರಿಗೆ ಬೇಕು.
ಯಾವ ಗರ್ಭಿಣಿಯೂ ಯಾವ ಕಾರಣಕ್ಕೂ
ಉಪವಾಸ ಇರುವುದ ಬೇಡ.
ಮಗುವನ್ನು ಹೆತ್ತ ನಂತರ
ಬೇಕಾದರೆ ಉಪವಾಸ ಮಾಡಿಕೊಳ್ಳಲಿ.







ವೈದ್ಯರು ಹೇಳಿದರು.

"ಪ್ರತಿಯೊಬ್ಬ ಗರ್ಭಿಣಿಯೂ ಎರಡು ಸಲ

ಧನುರ್ವಾಯು ನಿರೋಧಕ ಚುಚ್ಚು ಮದ್ದನ್ನು

ತೆಗೆದುಕೊಳ್ಳಲೇಬೇಕು"

ರಂಗಪ್ಪ ಅಧ್ಯಕ್ಷನಾಗಿರಬಹುದು ಆದ್ದರೂ ಚುಚ್ಚು ಮದ್ದಿಗೆ ಹೆದರುತ್ತಿದ್ದ.

ಆದರೆ ಈಗ ಅವನು ಆರೋಗ್ಯ ಕಾರ್ಯಕರ್ತೆಗೆ ಹೇಳಿದ.

"ದಯವಿಟ್ಟು ಯಾರು ಚುಚ್ಚು ಮದ್ದು ತೆಗೆದುಕೊಂಡಿಲ್ಲ.

ಎನ್ನುವುದನ್ನು ನೋಡಿ

ನಾನೇ ಸ್ವತ: ಅವರ ಗಂಡಂದಿರಿಗೆ

ಚುಚ್ಚು ಮದ್ದು ಕೊಡಿಸಲು ಹೇಳುತ್ತೇನೆ.

ಹೀಗೆಂದು ನಿರ್ಧರಿಸಲಾಯಿತು.







ಪ್ರತಿ ತಿಂಗಳಲ್ಲಿ ಒಂದು ದಿನ

ಎಲ್ಲಾ ಗರ್ಭಿಣಿಯರೂ ಪಂಚಾಯತಿ ಭವನದಲ್ಲಿ ಸೇರುವುದು.

ಮತ್ತು ನರ್ಸ್‌ನಿಂದ ಚುಚ್ಚು ಮದ್ದು ತೆಗೆದುಕೊಳ್ಳುವುದು.

ವೈದ್ಯರು ಮತ್ತೂ ಹೇಳಿದರು

"ಇನ್ನೂ ಒಂದು ವಿಷಯ.

ಹೆರಿಗೆಯ ಸಮಯದಲ್ಲಿ ದೊಡ್ಡ ಜವಾಬ್ದಾರಿ ಇದೆ.

ಸಹಾಯಕ್ಕಾಗಿ ತರಬೇತಿ ಹೊಂದಿದ ದಾದಿ ಇದ್ದರೆ

ನೀವು ಖಂಡಿತ ಸುರಕ್ಷಿತವಾಗಿ ಇರುತ್ತೀರಿ."

ರಂಗಪ್ಪ ಅಧ್ಯಕ್ಷನಾದರೂ ಹಳ್ಳಿಯ ದಾದಿಯರು

ತರಬೇತಿ ಹೊಂದಿದ್ದಾರೆಯೆ ಎಂದು ಯಾವತ್ತೂ ವಿಚಾರಿಸಿರಲಿಲ್ಲ.

ಒಂದಷ್ಟು ಚರ್ಚೆಯ ನಂತರ ಗೊತ್ತಾಯಿತು.

ಇಬ್ಬರು ಮಾತ್ರ ಒಳ್ಳೆಯ ತರಬೇತಿ ಪಡೆದಿದ್ದಾರೆ.

ಉಳಿದ ಇಬ್ಬರೂ ತರಬೇತಿ ಪಡೆಯಲು ಹೋಗಿದ್ದಾರೆ.





"ಈ ಬಗ್ಗೆ ನಾನು ಗಮನಿಸುತ್ತೇನೆ" ರಂಗಪ್ಪ ಹೇಳಿದ.

"ಇನ್ನು ಮುಂದೆ ರಂಗಾಪುರದಲ್ಲಿ

ತರಬೇತಿ ಹೊಂದಿದ ದಾದಿಯರ ಸಹಾಯವಿಲ್ಲದೆ ಮಕ್ಕಳು ಹುಟ್ಟುವುದಿಲ್ಲ."









ಇದು ಆ ವರ್ಷದಲ್ಲಿ ಜಾರಿಗೆ ಬಂತು

ರಂಗಾಪುರದಲ್ಲಿ ಹುಟ್ಟಿದ ಎಲ್ಲಾ ಮಕ್ಕಳೂ

ಬದುಕಿ ಉಳಿದರು ಮತ್ತು ಆರೋಗ್ಯವಂತರಾಗಿದ್ದರು.

ಪ್ರತಿಯೊಬ್ಬ ಗಂಡನೂ ತನ್ನ ಗರ್ಭಿಣಿ ಹೆಂಡತಿಯ ಬಗ್ಗೆ ಬಹಳಷ್ಟು ಕಾಳಜಿ ವಹಿಸಿದ

ರಾಜ್ಯದ ಎಲ್ಲಾ ಜನರಿಗೂ

ರಂಗಾಪುರ ಮತ್ತು ಅದರ ಪಂಚಾಯತಿಯ ಬಗ್ಗೆ ತಿಳಿಯಿತು.

ಅದರ ಅಧ್ಯಕ್ಷರಂತಹ ಜನ,

ತಮಗೂ ಬೇಕು ಎಂದು ಆಸೆಪಟ್ಟರು.

ಕೊನೆಗೂ ರಂಗಪ್ಪನ ಬದುಕಿನ ಮಹತ್ವದ

ದಿನ ಬಂತು.

".ಅಂ್ಞಾ.... .ಅಂ್ಞಾ.... ಆ....."

ಮಗು ಕಿರುಚಿತು.

"ನಾನು ಒಬ್ಬ ತಾಯಿ ! ...ಒಬ್ಬ ತಂದೆ !"

ರಂಗಪ್ಪ ಉದ್ಗರಿಸಿದ "ನನ್ನ ಮಗ"

"ನಾವು ನೋಡ್ತೇವೆ" ವೈದ್ಯರು ನಯವಾಗಿ ಹೇಳಿದರು.

"ಇದು ಹೆಣ್ಣು ಮಗು"

ರಂಗಪ್ಪನಿಗೆ ಅಘಾತವಾಯಿತು.

ದೇವರ ತಂತ್ರ ಅವನಲ್ಲಿ ಎಂತಹ

ನಂಬಿಕೆಯನ್ನು ಮೂಡಿಸಿತ್ತು !

ಆದರೆ ಪಂಚಾಯತಿಯ ಸದಸ್ಯರು

ಮತ್ತು ಹಳ್ಳಿಗರು ಸೇರಿದರು

ಎಲ್ಲಾ ನಿರ್ಧರಿಸಿ ರಂಗಪ್ಪನಿಗೆ ಹೇಳಿದರು

"ಇಷ್ಟೊಂದು ತೊಂದರೆಯ ನಂತರ

ಹೀಗಾದದ್ದು ಸರಿಯಾಗಲಿಲ್ಲ.





ನಾವು ಸೂರ್ಯದೇವನನ್ನು ಕೇಳುತ್ತೇವೆ.
ಈ ಸಲ ನಿಮಗೆ ಗಂಡು ಮಗುವಾಗುವುದು ಖಚಿತ"
ರಂಗಪ್ಪ ಚಿಂತೆಗೊಳಗಾದ
ತಾನು ಮತ್ತೊಮ್ಮೆ ಗರ್ಭ ಧರಿಸಿದರೆ ಏನಾಗಬಹುದು?.
ಅವನಿಗೆ ತಾನು ಗರ್ಭಧರಿಸಿದರೆ ಗಂಡಸು
ಎಂಬ ಬಗ್ಗೆ ಚಿಂತೆ ಇಲ್ಲ.
ಆದರೆ ಎಲ್ಲ ತೊಂದರೆ ಮತ್ತು ನೋವಿನ ಫಲ ಏನು?
ಮಗ? ಮಗಳು?
"ಏನಾದರೆ ಏನು?" ಕೇಳಿದ ರಂಗಪ್ಪ
"ಇಬ್ಬರೂ ಒಂದೆ"
ಒಂದು ವೇಳೆ ದೇವರು ನನಗೆ
ಹೆಚ್ಚು ಮಕ್ಕಳನ್ನು ಕೊಡಬಹುದು.
ಹೆಚ್ಚಿನ ಮಕ್ಕಳು ಯಾರಿಗೆ ಬೇಕು?
ಮಗ ಸಾಧಿಸುವುದನ್ನು,
ಮಗಳು ಸಾಧಿಸುವುದಿಲ್ಲ.
ಎಂದು ಏಕೆ ಅಂದುಕೊಳ್ಳಬೇಕು.
ಅವಳಿಗೆ ನಾನು ಶಿಕ್ಷಣ ನೀಡುತ್ತೇನೆ.



ಅವಳು ಯಾರಿಗೂ ಕಡಿಮೆಯಾಗದಂತೆ

ನಾನು ನೋಡಿಕೊಳ್ಳುತ್ತೇನೆ.

ಕಮಲಳಿಗೆ ಸಂತೋಷವಾಯಿತು.

ತುಂಬಾ ಸಂತೋಷವಾಯಿತು.

ಆದರೆ ಅವರಿಗೆ ಖಚಿತವಿರಲಿಲ್ಲ

ಅವರ ಸಂಬಂಧಿಕರು ಮತ್ತು ಹಿರಿಯರು

ಒತ್ತಾಯಿಸಬಹುದು.

ಮತ್ತು ಯಾರಿಗೆ ಗೊತ್ತು.

ಯಾವಾಗ ಅವರು ತಮ್ಮ ಮನಸ್ಸು ಬದಲಾಯಿಸಿಯಾರು ಎಂದು

ಆದ್ದರಿಂದ ರಂಗಪ್ಪ ಪಂಚಾಯಿತಿಯ ಸಭೆ ಕರೆದ.

ಮತ್ತು ಘೋಷಿಸಿದ;

(ಈಗ ಅವನಿಗೆ ಎಲ್ಲವೂ ಗೊತ್ತಾಗಿದೆ)

"ಎಲ್ಲರೂ ಕೇಳಿರಿ ಮತ್ತು ಗಮನ ಕೊಟ್ಟು ಕೇಳಿರಿ.

ಯಾವ ತಾಯಿಯೂ ಹೆಚ್ಚು ಮಕ್ಕಳನ್ನು ಹೆರದಂತೆ ನೋಡಿಕೊಳ್ಳುವುದು

ನಮ್ಮ ಜವಾಬ್ದಾರಿ.





ಪಂಚಾಯತಿಯ ಸದಸ್ಯರಾದ ನಾವು
ಪ್ರತಿಯೊಬ್ಬ ತಾಯಿಯ ಎರಡು ಮಕ್ಕಳು
ಜೀವಂತವಾಗಿ ಉಳಿಯುವಂತೆ ಮತ್ತು
ಆರೋಗ್ಯಕರವಾಗಿ ಬೆಳೆಯುವಂತೆ ನೋಡಿಕೊಳ್ಳಬೇಕು.
ಇದನ್ನು ಮೀರಿ ಯಾವ ತಾಯಿಯೂ ಒಂದು
ಅಥವಾ ಎರಡಕ್ಕಿಂತ ಹೆಚ್ಚು ಮಕ್ಕಳನ್ನು
ಹೆರುವುದಿಲ್ಲ ಎಂದ ಖಚಿತವಾದರೆ!





## ಚರ್ಚೆಗಾಗಿ

- ಯಾವ ಗಂಡಸೂ ಗರ್ಭಿಣಿಯಾಗುವುದಿಲ್ಲ. ಆದರೆ ಅವನ ಹೆಂಡತಿ ಗರ್ಭಿಣಿಯಾದಾಗ ಅವನಿಗೂ ಕೆಲವು ಜವಾಬ್ದಾರಿಗಳಿವೆ.

  ಅವು ಯಾವುವು?

- ಗರ್ಭಿಣಿ ಮಹಿಳೆಯರಿಗೆ ಸಂಬಂಧಿಸಿದಂತೆ ಪಂಚಾಯಿತಿ ಅಥವಾ ಗ್ರಾಮಕ್ಕೆ ಜವಾಬ್ದಾರಿ ಇದೆ. ಇದು ಎಷ್ಟರ ಮಟ್ಟಿಗೆ ನಿಮ್ಮ ಗ್ರಾಮದಲ್ಲಿ ಜಾರಿಗೆ ಬಂದಿದೆ?

- ಸರಕಾರದಿಂದ ಯಾವ ಸವಲತ್ತುಗಳು ದೊರೆತಿವೆ? ನಿಮ್ಮ ಪಂಚಾಯಿತಿಯಲ್ಲಿ ಮಹಿಳೆಯರ ಸವಲತ್ತುಗಳ ಅಭಿವೃದ್ಧಿಗಾಗಿ ಏನು ಮಾಡಬಹುದು?





ಸಾಮಾಜಿಕ ಬದಲಾವಣೆ ಸಾಕ್ಷರತಾ ಆಂದೋಲನಗಳ ಹಿಂದಿರುವ ಕನಸು. ಈ ಕನಸನ್ನು ನನಸಾಗಿಸುವುದು ಭಾರತ ಜ್ಞಾನ ವಿಜ್ಞಾನ ಸಮಿತಿಯ ಆಶಯ. ಸಾಕ್ಷರತೆಯ ಅರಿವು ಈ ನಾಡಿನ ಬಹುಪಾಲು ಜನ ಶತಮಾನಗಳಿಂದ ಕಳೆದುಕೊಂಡಿರುವುದನ್ನು ಪಡೆಯಲು ಪ್ರೇರೇಪಿಸುವ ಸಾಧನವಾಗಬೇಕು. ಮಾನವೀಯತೆ ಯನ್ನು ಸ್ಥಿರಗೊಳಿಸುವುದು ಪ್ರಜಾಪ್ರಭುತ್ವವನ್ನು ಬಲಗೊಳಿಸು ವುದು, ಸ್ತ್ರೀಸಮಾನತೆ, ಸ್ವಾವಲಂಭನೆ ಮತ್ತು ಅಭಿವೃದ್ಧಿ ಇದು ಸಾಕ್ಷರತಾ ಆಂದೋಲನದ ಮುಂದಿನ ಕಣ್ನೋಟ. ಈ ಕಣ್ನೋಟವನ್ನು ಸಾಧಿಸುವಲ್ಲಿ ದೃಢ ವಿಶ್ವಾಸ ಹೊಂದಿರುವ ಭಾರತ ಜ್ಞಾನ ವಿಜ್ಞಾನ ಸಮಿತಿ ದೇಶದಾದ್ಯಂತ ಕಾರ್ಯಕರ್ತರನ್ನು ಈ ಉದ್ದೇಶ ಸಾಧನೆಗಾಗಿ ಒಗ್ಗೂಡಿಸುತ್ತಿದೆ. ಈ ನಿಟ್ಟಿನಲ್ಲಿ ಬಿಜಿವಿಎಸ್ ರೂಪಿಸಿರುವ ಆರೋಗ್ಯ ಅರಿವು ಆಂದೋ ಲನವನ್ನು ಹಲವಾರು ಜಿಲ್ಲೆಗಳಲ್ಲಿ ಸಾಕ್ಷರೋತ್ತರ (POST LITTERECY) ಚಟುವಟಿಕೆಯಾಗಿ ಹಮ್ಮಿಕೊಳ್ಳಲಾಗುತ್ತಿದೆ. ಜನರಿಗೆ ಆರೋಗ್ಯ ಶಿಕ್ಷಣ ನೀಡುವ ಸಲುವಾಗಿ ಬಿಜಿವಿಎಸ್ ಕೇಂದ್ರ ಸಮಿತಿ ರೂಪಿಸಿರುವ ಈ ಪುಸ್ತಕಗಳು ಕರ್ನಾಟಕ ರಾಜ್ಯದಲ್ಲಿ ನಡೆಯುತ್ತಿರುವ ಸಾಕ್ಷರತಾ ಮತ್ತು ಸಾಕ್ಷರೋತ್ತರ ಕಾರ್ಯಕ್ರಮಗಳಿಗೆ ಪೂರಕ ಶಕ್ತಿ ತುಂಬಬಲ್ಲ ಶಕ್ತಿ ಹೊಂದಿವೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾಕ್ಷರತಾ ಚಳವಳಿಯಲ್ಲಿ ತೊಡಗಿಸಿಕೊಂಡಿರುವ ಸ್ನೇಹಿತರು ಬಾಷಾನುವಾದ ಮಾಡಿರುವ ಈ ಪುಸ್ತಕಗಳನ್ನು ನವಸಾಕ್ಷರರ ಮಧ್ಯೆ ಪರೀಕ್ಷೆಗೊಳಪಡಿಸಿದ ನಂತರ ಪ್ರಕಟಗೊಳಿಸುತ್ತಿದ್ದೇವೆ. ಈ ಪುಸ್ತಕಗಳ ಅನುವಾದ ಪರೀಕ್ಷೆ ಮತ್ತು ಮುದ್ರಣದ ಪೂರ್ಣ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸಿದ ದ.ಕ.ಜಿಲ್ಲೆಯ ಭಾರತ ಜ್ಞಾನ ವಿಜ್ಞಾನ ಸಮಿತಿ ಕಾರ್ಯಕರ್ತರಿಗೆ ಮತ್ತು ಬಾಷಾನುವಾದ ಮಾಡಿಕೊಟ್ಟ ಎಲ್ಲ ಮಹನೀಯರಿಗೆ ರಾಜ್ಯ ಸಮಿತಿಯು ಅಭಿನಂದನೆ ಸಲ್ಲಿಸುತ್ತದೆ.

- ಹೆಚ್. ಎಸ್. ನಿರಂಜನಾರಾಧ್ಯ
ಪ್ರಧಾನ ಕಾರ್ಯದರ್ಶಿ
ಬಿಜಿವಿಎಸ್. ಕರ್ನಾಟಕ ರಾಜ್ಯ ಸಮಿತಿ